## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 696
2. ಸದಸ್ಯರ ಹೆಸರು : ಶ್ರೀ ಗೋವಿಂದರಾಜು
3. ಉತ್ತರಿಸಬೇಕಾದ ದಿನಾಂಕ : 22-02-2022
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ ಸಂ. | ಕೋರಿರುವ ಮಾಹಿತಿ | ಉತ್ತರಗಳು |
|---|---|---|
| ಅ) | ರಾಜ್ಯ ಉಗ್ರಾಣ ನಿಗಮದ ವತಿಯಿಂದ ರಾಜ್ಯದಲ್ಲಿ ಎಷ್ಟು ಉಗ್ರಾಣಗಳನ್ನು ನಿರ್ಮಾಣ ಮಾಡಲಾಗಿದೆ: | ನಿಗಮವು 1958 ನೇ ಸಾಲಿನಿಂದ ಪ್ರಾರಂಭಿಸಿ, ರಾಜ್ಯಾದ್ಯಂತ ವಿವಿಧ ಸಾಮರ್ಥ್ಯದ ಒಟ್ಟು 729 ಉಗ್ರಾಣಗಳನ್ನು ನಿರ್ಮಾಣ ಮಾಡಿದ್ದು, ಉಗ್ರಾಣ ಚಟುವಟಿಕೆಗಳನ್ನು ನಿರ್ವಹಿಸಲಾಗುತ್ತಿರುತ್ತದೆ. |
| ಆ) | ಇದರಲ್ಲಿ ಕೇಂದ್ರ ಕೃಷಿ ವಿಕಾಸ ಯೋಜನೆಯಡಿ ನಿರ್ಮಾಣಗೊಂಡಿರುವ ಉಗ್ರಾಣಗಳ ಸಂಖ್ಯೆ ಎಷ್ಟು; ರಾಜ್ಯ ಸರ್ಕಾರದಿಂದ ನಿರ್ಮಾಣ ಗೊಂಡಿರುವ ಉಗ್ರಾಣಗಳೆಷ್ಟು; | ಕೇಂದ್ರ ಸರ್ಕಾರದ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ಅಡಿಯಲ್ಲಿ ರಾಜ್ಯದ 9 ಜಿಲ್ಲೆಗಳಲ್ಲಿ 12 ಉಗ್ರಾಣಗಳನ್ನು ಶೇ 100 ರಷ್ಟು RKVY ಅನುದಾನದಡಿಯಲ್ಲಿ ನಿರ್ಮಾಣ ಮಾಡಿ ರೈತರ ಸೇವೆಗೆ ಸಮರ್ಪಿಸಲಾಗಿರುತ್ತದೆ.<br>ರಾಜ್ಯ ಸರ್ಕಾರದ ಅನುದಾನದಿಂದ ಯಾವುದೇ ಉಗ್ರಾಣ ನಿರ್ಮಾಣವಾಗಿರುವುದಿಲ್ಲ. RKVY ಅಡಿಯಲ್ಲಿ ಕೇಂದ್ರ ಸರ್ಕಾರದ 25% ಹಾಗೂ 75% ನಬಾರ್ಡ್ ಆರ್ಥಿಕ ಸಾಲದೊಂದಿಗೆ 176 ಉಗ್ರಾಣಗಳನ್ನು ನಿರ್ಮಿಸಲಾಗಿರುತ್ತದೆ.<br><br>ಕ್ರ ಸಂ. / ಯೋಜನೆ / ಪೂರ್ಣಗೊಂಡಿರುವ ಉಗ್ರಾಣಗಳು<br>1 / WIF & NWS – 2013-14 / 43<br>2 / WIF & NWS – 2014-15 / 47<br>3 / WIF & NWS – 2015-16 / 86<br>ಒಟ್ಟು / 176<br><br>ಒಟ್ಟಾರೆಯಾಗಿ ನಿಗಮವು RIDF, GBRY, NIDA(PEG), AGRI BUDGET, AND WIF & NWS, ಯೋಜನೆಯಡಿಯಲ್ಲಿ ಮತ್ತು RKVY 100% ಅನುದಾನ ಯೋಜನೆಯಡಿಯಲ್ಲಿ 12 ಉಗ್ರಾಣಗಳು ಮತ್ತು 25% ಅನುದಾನದಡಿಯಲ್ಲಿ (75% ನಬಾರ್ಡ್ ಸಾಲ) 176 ಉಗ್ರಾಣಗಳನ್ನು ಸೇರಿದಂತೆ, ಒಟ್ಟು 729 ಉಗ್ರಾಣಗಳನ್ನು ರಾಜ್ಯಾದ್ಯಂತ ನಿರ್ಮಿಸಿರುತ್ತದೆ. |
| ಇ) | ಈ ನಿಗಮಗಳಲ್ಲಿ ಅವ್ಯವಹಾರವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ ಯಾವ ಕ್ರಮ ಕೈಗೊಳ್ಳಲಾಗಿದೆ ; | ಮೇಲ್ಕಂಡ ನಿರ್ಮಾಣ ಕಾಮಗಾರಿಗಳಲ್ಲಿ ಯಾವುದೇ ಅವ್ಯವಹಾರ ಆಗಿರುವುದಿಲ್ಲ. |
| ಈ) | ಉಗ್ರಾಣಗಳ ನಿರ್ಮಾಣಕ್ಕಾಗಿ ಯಾವ ಕಂಪನಿ ಅಥವಾ ವ್ಯಕ್ತಿಗೆ ಗುತ್ತಿಗೆ ನೀಡಲಾಗಿದೆ; (ಪೂರ್ಣ ಮಾಹಿತಿ ನೀಡುವುದು) | ಗುತ್ತಿಗೆದಾರರ ವಿವರಗಳು<br>1. RKVY 100% ಅನುದಾನ 12 ಉಗ್ರಾಣಗಳು– ಎನ್.ಕೆ. ಸೋಮಶೇಖರಪ್ಪ(ದಾವಣಗೆರೆ), ರವೀಂದ್ರನಾಥ್(ಬೆಂಗಳೂರು), ಎಸ್. ಸಿದ್ದನಗೌಡ(ರಾಯಚೂರು), ಮುರಳಿ ಎಂ. ಗೌರ್(ಯಾದಗಿರಿ) ಹಾಗೂ ಮೆ॥ ಬಾಲಾಜಿ ಬಿಲ್ಡರ್ಸ್(ಬೆಂಗಳೂರು)<br>2. WIF & NWS – 2013-14– ಎನ್.ಕೆ. ಸೋಮಶೇಖರಪ್ಪ(ದಾವಣಗೆರೆ), ರವೀಂದ್ರನಾಥ್(ಬೆಂಗಳೂರು), ಮನೋಹರ(ಹಾಸನ), ಮಲ್ಲಿಕಾರ್ಜುನಯ್ಯ(ಬೆಂಗಳೂರು) ಹಾಗೂ ಮೆ॥ ಬಾಲಾಜಿ ಬಿಲ್ಡರ್ಸ್(ಬೆಂಗಳೂರು), ಜಿ.ಎಂ. ರಾಘವೇಂದ್ರ(ತುಮಕೂರು) |

| | | |
|---|---|---|
| | | 3. WIF & NWS – 2014-15–<br>ಎನ್.ಕೆ. ಸೋಮಶೇಖರಪ್ಪ(ದಾವಣಗೆರೆ), ರವೀಂದ್ರನಾಥ್(ಬೆಂಗಳೂರು), ಮನೋಹರ(ಹಾಸನ), ಮಲ್ಲಿಕಾರ್ಜುನಯ್ಯ(ಬೆಂಗಳೂರು) ಹಾಗೂ ಮೆ॥ ಬಾಲಾಜಿ ಬಿಲ್ಡರ್ಸ್(ಬೆಂಗಳೂರು), ಜಿ.ಎಂ. ರಾಘವೇಂದ್ರ(ತುಮಕೂರು)<br>4. WIF & NWS – 2015-16-<br>ಮೆ॥ ಸೋಮ ಎಂಟರ್‌ಪ್ರೈಸಸ್(ಬೆಂಗಳೂರು) |
| ಉ) | ಗುತ್ತಿಗೆ ಪಡೆದವರು ನಿಗದಿತ ಅವಧಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಿರುತ್ತಾರೆಯೇ; | RKVY ಯೋಜನೆಯಡಿಯಲ್ಲಿ ಸಂಬಂಧಿಸಿದಂತೆ WIF & NWS – 2015-16 ಸಾಲಿನಲ್ಲಿ ಕೈಗೊಂಡ ಒಟ್ಟು 163 ಉಗ್ರಾಣ ಕಾಮಗಾರಿಗಳ ಪೈಕಿ 86 ಉಗ್ರಾಣಗಳ ಕಾಮಗಾರಿ ಪೂರ್ಣಗೊಂಡಿರುತ್ತವೆ. ಉಳಿದಂತೆ 77 ಉಗ್ರಾಣಗಳ ಕಾಮಗಾರಿ ಅಪೂರ್ಣಗೊಂಡಿರುತ್ತವೆ. ಈ ಯೋಜನೆಗೆ ಸೀಮಿತಗೊಂಡಂತೆ ಸದರಿ ಯೋಜನೆಯನ್ನು ಪೂರ್ಣಗೊಳಿಸಲು 9 ತಿಂಗಳು ಕಾಲಾವಧಿ ನಿಗದಿ ಪಡಿಸಿದ್ದು, ಯೋಜನೆಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಿರುವುದಿಲ್ಲ. ಉಳಿದಂತೆ RKVY ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳು ನಿಗದಿತ ಅವಧಿಯಲ್ಲಿ ಪೂರ್ಣಗೊಂಡಿರುತ್ತವೆ. |
| ಊ) | ಕಾಮಗಾರಿಗಳು ವಿಳಂಭವಾಗಿರುವುದರಿಂದ ಸರ್ಕಾರಕ್ಕೆ ನಷ್ಟವುಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು ? | WIF & NWS –2015-16 ಸಾಲಿನ ಯೋಜನೆಯ ಅನುಷ್ಠಾನದ ವಿಳಂಭದಿಂದಾಗಿ ನಿಗಮಕ್ಕೆ ಆರ್ಥಿಕ ನಷ್ಟವಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಇದಕ್ಕೆ ಸಂಬಂದಿಸಿದಂತೆ ಯೋಜನೆಯ ಅನುಷ್ಠಾನದ ಸಮಯದಲ್ಲಿ ನಿಯಮಗಳನ್ನು ಉಲ್ಲಂಘಿಸಿದ ಅಧಿಕಾರಿಗಳ ಮೇಲೆ ಕ್ರಮವನ್ನು ಕೈಗೊಳ್ಳುವ ವಿಷಯ ಪರಿಶೀಲನೆಯಲ್ಲಿರುತ್ತದೆ.<br>ನಿಗಮವು ಸರ್ಕಾರದ ಅನುಮೋದನೆಯಂತೆ WIF & NWS-2015-16 & RIDF-XXII ಯೋಜನೆಯಡಿಯಲ್ಲಿ 60 ಕೇಂದ್ರಗಳಲ್ಲಿ 11.14 ಲಕ್ಷ ಮೆ.ಟನ್ ಸಾಮರ್ಥ್ಯದ ಉಗ್ರಾಣಗಳು ಮತ್ತು ನಿಗಮದ ಹಾಲಿ ಇರುವ ಹಳೆಯ 89 ಉಗ್ರಾಣ ಕೇಂದ್ರಗಳಿಗೆ ಮೂಲಭೂತ ಸೌಕರ್ಯ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಒಟ್ಟು ಮೊತ್ತ ರೂ. 795.97 ಕೋಟಿಗಳಲ್ಲಿ 9 ತಿಂಗಳ ಅವಧಿಯಲ್ಲಿ ಪೂರ್ಣಗೊಳಿಸುವ ಷರತ್ತಿನೊಂದಿಗೆ ಮೆ॥ ಸೋಮ ಎಂಟರ್ ಪ್ರೈ.ಲಿ ರವರಿಗೆ ದಿನಾಂಕ : 17.05.2016 ರಂದು ಕಾರ್ಯಾದೇಶ ನೀಡಲಾಗಿರುತ್ತದೆ.<br>ಗುತ್ತಿಗೆದಾರರು ಯೋಜನೆಯನ್ನು ಸ್ಥಗಿತಗೊಳಿಸಿ ದಿನಾಂಕ : 28.01.2019 ರಂದು ಮಧ್ಯಸ್ಥಿಕೆ ಪ್ರಕರಣ ದಾಖಲು ಮಾಡಿರುತ್ತಾರೆ. ಪ್ರಸ್ತುತ ಮಧ್ಯಸ್ಥಿಕೆ ಪ್ರಕರಣದ ತೀರ್ಪು ದಿನಾಂಕ : 10.06.2021 ರಂದು ಗುತ್ತಿಗೆದಾರರ ಪರವಾಗಿ ನೀಡಿದ್ದು, ಇದನ್ನು ನಿಗಮವು ವಾಣಿಜ್ಯ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ಮಧ್ಯಸ್ಥಿಕೆ ನ್ಯಾಯಾಧೀಕರಣದ ತೀರ್ಪಿಗೆ ತಡೆಯಾಜ್ಞೆ ನೀಡಿರುತ್ತದೆ. ಪ್ರಕರಣದ ವಿಚಾರಣೆ ಬಾಕಿ ಇರುತ್ತದೆ.<br>ಮೇಲಿನ ಯೋಜನೆ ಅನುಷ್ಠಾನಗೊಳ್ಳುವ ಸಮಯದಲ್ಲಿ ಸೂಕ್ತ ಜಮೀನಿನ ಕೊರತೆಯಿಂದ ಪ್ರಸ್ತುತ 9.24 ಲಕ್ಷ ಮೆ.ಟನ್ ಉಗ್ರಾಣಗಳು ಮಾತ್ರ ನಿರ್ಮಾಣಗೊಳ್ಳುತ್ತಿದ್ದು, ಅದರ ಪರಿಷ್ಕೃತ ಅಂದಾಜು ರೂ. 862.37 ಕೋಟಿ ಆಗಿರುತ್ತದೆ. ಅದರ ಜೊತೆಗೆ ಆರ್ಬಿಟ್ರೇಷನ್ ಅವಾರ್ಡ್‌ನಂತೆ ಗುತ್ತಿಗೆದಾರರಿಗೆ ಹೆಚ್ಚುವರಿ ಮೊತ್ತವನ್ನು ಪಾವತಿಸಬೇಕಾಗಿರುತ್ತದೆ. ಈ ಹಿನ್ನಲೆಯಲ್ಲಿ ಅಗತ್ಯವಿರುವ ಹೆಚ್ಚುವರಿ ಅನುದಾನ ರೂ.376.54 ಕೋಟಿಗಳ ಆರ್ಥಿಕ ನೆರವನ್ನು ಪಡೆದು ಅಪೂರ್ಣಗೊಂಡಿರುವ ಕಾಮಗಾರಿಗಳನ್ನು ಪೂರ್ಣಗೊಳಿಸುವ ಬಗ್ಗೆ ಪರಿಶೀಲಿಸಲಾಗುತ್ತಿದೆ. |

**No. CO 20 WHC 2022**

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು